ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ಗೋಮಾಳ ಜಮೀನನ್ನು ಅತಿಕ್ರಮಣ ಮಾಡಿರುವ ಬಗ್ಗೆ

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ):-

194(320) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಮಂಡ್ಯ ಜಿಲ್ಲೆ ನಾಗಮಂಗಲ ತಾಲ್ಲೂಕು, ಹೊಣಕೆರೆ ಹೋಬಳಿಯ ಮರಡಿಪುರ ಗ್ರಾಮ ಹಾಗೂ ಹೊಣಕೆರೆ ಹೋಬಳಿಯಲ್ಲಿ ಇರುವ ಗ್ರಾಮಗಳಲ್ಲಿ ಇರುವಂತಹ ಸರ್ಕಾರಿ ಗೋಮಾಳಗಳು ಎಷ್ಟು ; (ಗ್ರಾಮಗಳವಾರು ಸಂಪೂರ್ಣ ಮಾಹಿತಿ ನೀಡುವುದು) ಮರಡಿಪುರ ಗ್ರಾಮದಲ್ಲಿರುವ ಶ್ರೀ ರಂಗನಾಥ ಸ್ವಾಮಿ ಬೆಟ್ಟ ಹಾಗೂ ಸುತ್ತಮುತ್ತಲಿನಲ್ಲಿರುವ ಗೋಮಾಳಗಳ ವಿಸ್ತೀರ್ಣ ಎಷ್ಟು ; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಶ್ರೀ ರಂಗನಾಥ ಸ್ವಾಮಿ ಬೆಟ್ಟಕ್ಕೆ ಸೇರಿರುವ ಜಾಗ ಎಷ್ಟು; ಹಾಗೂ ಬೆಟ್ಟದ ಪಕ್ಕದಲ್ಲಿರುವ ಗೋಮಾಳ ಎಷ್ಟು; (ಸಂಪೂರ್ಣ ಮಾಹಿತಿ ನೀಡುವುದು)

(ಇ) ಶ್ರೀ ರಂಗನಾಥ ಸ್ವಾಮಿ ಬೆಟ್ಟದಲ್ಲಿ ಗೋಮಾಳವನ್ನು ಕೆಲವು ಜನರು ಉಪಯೋಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ; (ಗೋಮಾಳವನ್ನು ಉಪಯೋಗಿಸುತ್ತಿರುವ ರೈತರ ಹೆಸರು ವಿಳಾಸ ಹಾಗೂ ಅವರು ಗೋಮಾಳದಲ್ಲಿ ಬೆಳೆಯುತ್ತಿರುವ ಆಹಾರ ಪದಾರ್ಥಗಳ ಸಂಪೂರ್ಣ ಮಾಹಿತಿ ನೀಡುವುದು)

(ಈ) ಮರಡಿ ಗ್ರಾಮದಿಂದ ಕೆಂಪನಕೊಪ್ಪಲಿಗೆ ಹೋಗುವ ರಸ್ತೆಯನ್ನು ಸಂಪೂರ್ಣವಾಗಿ ರೈತರು ಉಪಯೋಗಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಕೆಂಪನಕೊಪ್ಪಲು ಗ್ರಾಮಕ್ಕೆ ಸಾರ್ವಜನಿಕರು ಹಾಗೂ ಎತ್ತಿನ ಬಂಡಿಗಳು ಹೋಗಲು ಈ ರಸ್ತೆಯನ್ನು ಯಾವಾಗ ತೆರವುಗೊಳಿಸಲಾಗುವುದು ? (ಸಂಪೂರ್ಣ ಮಾಹಿತಿ ನೀಡುವುದು)